# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಮಾರ್ಚ್ ೨೭, ೨೦೧೪ (ಚೈತ್ರ ೬, ಶಕ ವರ್ಷ ೧೯೩೫)<br>Bangalore, Thursday, March 27, 2014 (Chaithra 6, Shaka Varsha 1935) | ಸಂಚಿಕೆ ೧೩<br>Issue 13 |
|---|---|---|

## ಭಾಗ ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು

### ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಪ್ರಿಲಿಮಿನರಿ ಅಧಿಸೂಚನೆ

**ಸಂ: ಕೆ.ಎಸ್.ಎ:ಸಿಆರ್:46/12–13, ದಿನಾಂಕ: 16–12–2013**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆರ್.ಆರ್.ನಗರ ವಲಯದ, ವ್ಯಾಪ್ತಿಯಲ್ಲಿ ಬರುವ ಸುಮ್ಮನಹಳ್ಳಿ ಮತಾಪುರ ದಲಿತ ಕಾಲೋನಿ ಕೊಳಚೆ ಪ್ರದೇಶ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ 69 ಕುಟುಂಬಗಳು ವಾಸವಾಗಿದ್ದು, ಈ ಪ್ರದೇಶದಲ್ಲಿ ಹಿಂದಿನ ಬೆಂಗಳೂರು ಮಹಾನಗರ ಪಾಲಿಕೆ ವತಿಯಿಂದ ಸ್ವಲ್ಪ ಮಟ್ಟಿಗೆ ಮೂಲಭೂತ ಸೌಕರ್ಯಗಳನ್ನು ಕಲ್ಪಸಲಾಗಿದ್ದರೂ ಸಹ ಈಗಲೂ ಇದು ಕೊಳಚೆ ಪ್ರದೇಶದ ಗುಣ ಲಕ್ಷಣಗಳನ್ನು ಹೊಂದಿದೆ. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ದಿನಾಂಕ: 16–1–2007ರಿಂದ ಅಸ್ತಿತ್ವಕ್ಕೆ ಬಂದಿರುವ ಹಿನ್ನೆಲೆಯಲ್ಲಿ ಸದರಿ ಕೊಳಚೆ ಪ್ರದೇಶದಲ್ಲಿನ ನಿವಾಸಿಗಳಿಗೆ ಹಕ್ಕುಪತ್ರಗಳನ್ನು ನೀಡಲು ಸರ್ಕಾರ ತೀರ್ಮಾನಿಸಿರುವುದರಿಂದ, ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3ರ ಅಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸಲು ದಿನಾಂಕ: 03–10–2013 ರಂದು ಪ್ರಸ್ತಾವನೆಯನ್ನು ಆಯುಕ್ತರು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಲಿ ಇವರಿಂದ ಸಲ್ಲಿಸಲ್ಪಟ್ಟಿರುತ್ತದೆ. ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿ ಕೊಳಚೆ ಪ್ರದೇಶವೆಂದು, ಘೋಷಿಸುವುದು ಅವಶ್ಯವೆಂದು ಕಂಡು ಬಂದಿರುತ್ತದೆ.

ಏತನ್ಮಧ್ಯ ಸರ್ಕಾರದ ಸುತ್ತೋಲೆ ನಂ.71 ಕೋಮಂಇ 2009, ದಿನಾಂಕ: 24–2–2010 ರಲ್ಲಿ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಕಲಂ 3 ಮತ್ತು 11 ರಡಿಯಲ್ಲಿ ಜಿಲ್ಲಾಧಿಕಾರಿಗಳು, ಕೊಳಚೆ ಪ್ರದೇಶಗಳನ್ನು ಕೊಳಚೆ ಪ್ರದೇಶವೆಂದು ಘೋಷಿಸಿ ಅಧಿಸೂಚನೆ ಹೊರಡಿಸುವ ಮುನ್ನ ವಸತಿ ಇಲಾಖೆಯ ಸರ್ಕಾರದ ಕಾರ್ಯದರ್ಶಿಯವರ ಅನುಮೋದನೆ ಪಡೆಯತಕ್ಕದ್ದೆಂದು ಸೂಚನೆಯಿದ್ದು, ಆ ಪ್ರಕಾರವಾಗಿ ಕೊಳಚೆ ಪ್ರದೇಶಗಳೆಂದು ಘೋಷಣೆ ಮಾಡಬೇಕಾದ ಪ್ರಸ್ತಾವನೆಗಳನ್ನು ಈ ಕಛೇರಿಯಿಂದ ಸರ್ಕಾರಕ್ಕೆ ಅನುಮೋದನೆಗಾಗಿ ಸಲ್ಲಿಸಲಾಗಿತ್ತು. ತದನಂತರದಲ್ಲಿ ಸರ್ಕಾರದ ಪತ್ರ ಸಂ.ವಇ 71 ಕೊಮಂಇ 2009, ದಿನಾಂಕ:12–7–2010 ರ ಪತ್ರದಲ್ಲಿ ಕೊಳಚೆ ಪ್ರದೇಶಗಳೆಂದು ಘೋಷಿಸುವ ಬಗ್ಗೆ ಇನ್ನು ಮುಂದೆ ಸರ್ಕಾರದ ಪೂರ್ವಾನುಮೋದನೆ ಕೋರಿ ಪ್ರಸ್ತಾವನೆಗಳನ್ನು ಸರ್ಕಾರಕ್ಕೆ ಸಲ್ಲಿಸುವ ಬದಲು ದಿನಾಂಕ: 02-7-2010 ರಲ್ಲಿನ ಸೂಚನೆಯಂತೆ ಮತ್ತು ಹಾಲಿ ಅಸ್ತಿತ್ವದಲ್ಲಿರುವ ನಿಯಮಗಳಡಿಯ ಕಾರ್ಯವಿಧಾನವನ್ನು ಅನುಸರಿಸಿದಂತೆ ಕ್ರಮವಹಿಸಿ ಅಧಿಸೂಚನೆ ಸಂಖ್ಯೆ:ವಇ ಕೊಮಂಇ 2001, ದಿನಾಂಕ:26–6–2002 ರಲ್ಲಿ ಜಿಲ್ಲಾಧಿಕಾರಿಗಳಿಗೆ ಪ್ರದತ್ತ ಮಾಡಲಾಗಿರುವ ಅಧಿಕಾರ ವ್ಯಾಪ್ತಿಯಲ್ಲಿ ಘೋಷಣೆಗೆ ಕ್ರಮವಹಿಸುವುದು ಎಂದು ಸರ್ಕಾರವು ನಿರ್ದೇಶನ ನೀಡಿ ಪ್ರಸ್ತಾವನೆಗಳನ್ನು ಹಿಂದಿರುಗಿಸಲ್ಪಟ್ಟಿರುತ್ತದೆ ಮತ್ತು ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಅವರಿಗೆ ಹಿಂದಿನಂತೆ ತಮ್ಮ ಕಛೇರಿಯ ಹಂತದಲ್ಲಿಯೇ ಕೊಳಚೆ ಪ್ರದೇಶಗಳ ಘೋಷಣೆಯನ್ನು ಮಾಡಲು ನಿರ್ದೇಶನ ನೀಡಿರುತ್ತದೆ.

ಆದ್ದರಿಂದ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3 ರಡಿ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು "**ಕೊಳಚೆ ಪ್ರದೇಶ**"ವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಶೇಷಾದ್ರಿಪುರ, ಬೆಂಗಳೂರು–20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆರ್.ಆರ್.ನಗರ ವಲಯದ ವ್ಯಾಪ್ತಿಯಲ್ಲಿ ಬರುವ ಸಜ್ಜೆಪಾಳ್ಯ ಮಾತಪುರ ದಲಿತ ಕಾಲೋನಿ ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತ:ಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದಲ್ಲಿರುವ ಜಮೀನಿನ ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಮಾತಪುರ ದಲಿತ ಕಾಲೋನಿ ಕೊಳಚೆ ಪ್ರದೇಶ ಸಜ್ಜೆಪಾಳ್ಯ ಯಶವಂತಪುರ ಹೋಬಳಿ ಬೆಂಗಳೂರು ಉತ್ತರ ತಾಲ್ಲೂಕು | ಆರ್.ಟಿ.ಸಿ. ಯಂತೆ ಸರ್ಕಾರಿ ಬೆಗ್ಗರ್ ಕಾಲೋನಿ ಹಾಗೂ ಸುಮ್ಮನಹಳ್ಳಿ ಕುಷ್ಠರೋಗಿಗಳ ಕೇಂದ್ರ | 03 | 371/2 | ಸದರಿ ಸರ್ವೆ ನಂ. ನ ಉಳಿಕೆ ಪ್ರದೇಶ | ಸಶ್ಮಾನ ಮತ್ತು ಸದರಿ ಸರ್ವೆ ನಂ. ನ ಉಳಿಕೆ ಪ್ರದೇಶ | ಚರಂಡಿ | ರಸ್ತೆ |

**ಡಾ|| ಜಿ.ಸಿ. ಪ್ರಕಾಶ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

**PR-52**
**SC-50**

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಂತಿಮ ಅಧಿಸೂಚನೆ

### ಸಂಖ್ಯೆ: ಕೆ.ಎಸ್.ಎ./ಸಿ.ಆರ್./12/1991-92, ದಿನಾಂಕ: 28ನೇ ಜನವರಿ, 2014

ಸಂಖ್ಯೆ: ಕೆ.ಎಸ್.ಎ./ಸಿ.ಆರ್./12/1991-92, ದಿನಾಂಕ: 05-06-1992ರ ಪ್ರಿಲಿಮಿನರಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿ ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್‌ನಲ್ಲಿರುವ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವ ಕೋಲಾರ ರಸ್ತೆ ಹೊಸ ಬಿನ್ನಮಂಗಲ ಕೊಳಚೆ ಪ್ರದೇಶದ [ಮರ್ಫಿ ಟೌನ್, ಬಿನ್ನಮಂಗಲ ಕೊಳಚೆ ಪ್ರದೇಶ, ಹಳೆ ಮದ್ರಾಸ್ ರಸ್ತೆ, ಬೆಂಗಳೂರು] ಸ.ನಂ. 130ರಲ್ಲಿ 0-20 ಗುಂಟೆ, ಸ.ನಂ. 134ರಲ್ಲಿ 0-05 ಗುಂಟೆ, ಸ.ನಂ. 136ರಲ್ಲಿ 0-11 ಗುಂಟೆ, ಸ.ನಂ. 137ರಲ್ಲಿ 0-05 ಗುಂಟೆ, ಸ.ನಂ. 141ರಲ್ಲಿ 0-02 ಗುಂಟೆ ಮತ್ತು ಸ.ನಂ. 148ರಲ್ಲಿ 0-13 ಗುಂಟೆ, ಒಟ್ಟು 1-16 ಎ/ಗುಂಟೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ, ಸಂಬಂಧಿಸಿದವರಿಂದ ಮತ್ತು ಸಾರ್ವಜನಿಕರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು. ಕೊಳಚೆ ನಿವಾಸಿಗಳು ಮತ್ತು ಭೂ ಮಾಲೀಕರು ಪರಸ್ಪರ ಒಪ್ಪಂದ ಮಾಡಿಕೊಂಡಿರುವ ಹಿನ್ನೆಲೆಯಲ್ಲಿ ಅಧಿಸೂಚನೆ ಸಂಖ್ಯೆ: ಕೆ.ಎಸ್.ಎ./ಸಿ.ಆರ್./12/1991-92, ದಿನಾಂಕ: 31-03-1998ರಲ್ಲಿ ಸ.ನಂ. 130ರಲ್ಲಿ 0-20 ಗುಂಟೆ ಮತ್ತು 134ರಲ್ಲಿ 0-05 ಗುಂಟೆ ಪ್ರದೇಶವನ್ನು ದಿನಾಂಕ: 05-06-1992ರ ಪ್ರಿಲಿಮಿನರಿ ಅಧಿಸೂಚನೆಯಿಂದ ಕೈಬಿಡಲಾಗಿರುತ್ತದೆ.

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವ ಕೋಲಾರ ರಸ್ತೆ ಹೊಸ ಬಿನ್ನಮಂಗಲ ಕೊಳಚೆ ಪ್ರದೇಶವನ್ನು ಬಿನ್ನಮಂಗಲ ಗ್ರಾಮದ ಸ.ನಂ. 130ರಲ್ಲಿ 0-20 ಗುಂಟೆ, ಸ.ನಂ. 134ರಲ್ಲಿ 0-05 ಗುಂಟೆ, 136ರಲ್ಲಿ 0-11 ಗುಂಟೆ, 137ರಲ್ಲಿ 0-05 ಗುಂಟೆ 141ರಲ್ಲಿ 0-02 ಗುಂಟೆ ಮತ್ತು 148ರಲ್ಲಿ 0-13 ಗುಂಟೆ, ಒಟ್ಟು 1-16 ಎ/ಗುಂಟೆ ಪ್ರದೇಶಗಳನ್ನು ಮಂಡಳಿ ಕಾಯ್ದೆ ಕಲಂ 3ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿದ್ದು, ಸ.ನಂ. 130ರಲ್ಲಿ 0-20 ಗುಂಟೆ ಮತ್ತು 134ರಲ್ಲಿ 0-05 ಗುಂಟೆ ಪ್ರದೇಶವನ್ನು ಘೋಷಣೆಯಿಂದ ಕೈಬಿಡಲಾಗಿದ್ದು, ಉಳಿದ 4 ಸ.ನಂ.ಗಳ ಪೈಕಿ ಒಟ್ಟು ವಿಸ್ತೀರ್ಣ 0-31 ಗುಂಟೆ ಜಮೀನು ಮಾತ್ರ ಪ್ರಿಲಿಮಿನರಿ ಘೋಷಣೆಗೆ ಒಳಪಟ್ಟಿದ್ದು, ಅಂತಿಮ ಅಧಿಸೂಚನೆ ಹೊರಡಿಸಿರುವುದಿಲ್ಲವೆಂದೂ, ತದನಂತರ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್‌ರ ಪಿಟಿಷನ್ ನಂ. 16576-16577/1998 (ಜಿಎಂ), ದಿನಾಂಕ: 29-01-2002ರ ಆದೇಶದಲ್ಲಿ ಮಾಲೀಕತ್ವದ ಬಗ್ಗೆ ಸಿವಿಲ್ ದಾವೆ ಆದೇಶಕ್ಕೆ ಒಳಪಟ್ಟಿದೆ ಎಂದು ಆದೇಶವಿದ್ದು ಹಾಗೂ ಭೂ ದಾಖಲೆಗಳ ಸಹಾಯಕ ನಿರ್ದೇಶಕರು, ನಗರ ಮಾಪನ ತಂಡ-2, ಬೆಂಗಳೂರು ರವರು ತಯಾರಿಸಿರುವ ನಕ್ಷೆಯನ್ನು ಲಗತ್ತಿಸಿ ಕಳುಹಿಸುತ್ತಾ, ಹಿಂದೆ ಪ್ರಾಥಮಿಕ ಅಧಿಸೂಚನೆಯಲ್ಲಿ ಸರ್ವೆ ನಂಬರ್‌ಗಳನ್ನು ನಮೂದಿಸಿ, ಅಧಿಸೂಚನೆ ಹೊರಡಿಸಲಾಗಿದ್ದು, ಅಂತಿಮ ಅಧಿಸೂಚನೆ ಹೊರಡಿಸುವ ಸಮಯದಲ್ಲಿ ಸದರಿ ಸರ್ವೆ ನಂಬರ್‌ಗಳನ್ನು ಸಿ.ಟಿ.ಎಸ್. ನಂಬರ್‌ಗಳಾಗಿ ಪರಿವರ್ತಿಸಿರುವುದರಿಂದ ಅಂತಿಮ ಅಧಿಸೂಚನೆಯಲ್ಲಿ ಸಿ.ಟಿ.ಎಸ್. ನಂಬರ್‌ಗಳೆಂದು ಪರಿಗಣಿಸಿ ಅಧಿಸೂಚನೆ ಹೊರಡಿಸಲು ಕೋರಿರುತ್ತಾರೆ.

ಆದ್ದರಿಂದ, ನಕ್ಷೆಯಲ್ಲಿ ಕಾಣಿಸಿದಂತೆ ಕೊಳಚೆ ಪ್ರದೇಶದ ಒಳಗಿರುವ ನಗರ ಮಾಪನ ಸಂಖ್ಯೆಗಳ ಒಟ್ಟು ವಿಸ್ತೀರ್ಣದಲ್ಲಿ ಖಾಲಿ ಜಾಗ ಮತ್ತು ರಸ್ತೆಯನ್ನು ಹೊರತುಪಡಿಸಿ ಅಥವಾ ಪ್ರಾರಂಭಿಕ ಅಧಿಸೂಚನೆಯಲ್ಲಿ ನಮೂದಿಸಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ತೋರಿಸಿರುವಂತೆ 0-31 ಗುಂಟೆ ಕೊಳಚೆ ಪ್ರದೇಶದಲ್ಲಿ ಗುಡಿಸಲು/ಮನೆಗಳು ದುರಸ್ಥಿ ಇಲ್ಲದೇ ಕುಡಿಯುನ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಅನಾರೋಗ್ಯದ ವಾತಾವರಣ ಉಂಟಾಗಿರುತ್ತದೆ. ಸದರಿ ಪ್ರದೇಶವನ್ನು ಅಭಿವೃದ್ಧಿಪಡಿಸುವುದು ಅತ್ಯಗತ್ಯವಾಗಿರುತ್ತದೆ. ಆದ್ದರಿಂದ, ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ ಮೇಲ್ಕಂಡ ಕಾಯ್ದೆಯ ಸೆಕ್ಷನ್ 3ರಡಿಯಲ್ಲಿ ಸ.ನಂ. 148ರಲ್ಲಿ 0-13 ಗುಂಟೆ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 68(1) ಮತ್ತು 68(5)ರಡಿ ಅಧಿಸೂಚನೆ ಹೊರಡಿಸುವ ಷರತ್ತಿಗೊಳಪಡಿಸಿ, ಉಳಿದ ಸ.ನಂ. ಗಳಾದ ಸ.ನಂ. 136ರಲ್ಲಿ 0-11 ಗುಂಟೆ, 137ರಲ್ಲಿ 0-05 ಗುಂಟೆ ಮತ್ತು 141ರಲ್ಲಿ 0-01 ಗುಂಟೆ ಜಮೀನುಗಳನ್ನು ನಗರ ಮಾಪನ ಸಂಖ್ಯೆ: 405ರ ಪೈಕಿ ಪ್ರದೇಶದ ಹಕ್ಕುದಾರಿಕೆ ಕುರಿತು ನಿರ್ಧಾರವಾಗಿಲ್ಲದಿರುವುದರಿಂದ ಮತ್ತು ಮಾನ್ಯ ಉಚ್ಚ ನ್ಯಾಯಾಲಯದ ರಿಟ್ ಪಿಟಿಷನ್ ನಂ. 16576-16577/1998 (ಜಿ.ಎಂ.), ದಿನಾಂಕ: 29-01-2002ರ ಆದೇಶದಲ್ಲಿ ಮಾಲೀಕತ್ವದ ಬಗ್ಗೆ ಸಿವಿಲ್ ದಾವೆ ಅದೇಶಕ್ಕೆ ಒಳಪಟ್ಟಿದೆ ಎಂದು

ಆದೇಶವಿರುವುದರಿಂದ ಮುಂದೆ ಯಾವುದೇ ನ್ಯಾಯಾಲಯದಲ್ಲಿ ಆಗುವಂತಹ ಅಂತಿಮ ತೀರ್ಪಿಗೆ ಒಳಪಟ್ಟು, 0–31 ಗುಂಟೆ ಪ್ರದೇಶವನ್ನು ಈ ಕೆಳಕಂಡ ಷೆಡ್ಯೂಲ್‌ನಲ್ಲಿ ತೋರಿಸಿರುವಂತೆ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವ ಕೋಲಾರ ರಸ್ತೆ ಹೊಸ ಬಿನ್ನಮಂಗಲ ಕೊಳಚೆ ಪ್ರದೇಶದ ಚಕ್ಕುಬಂದಿ ಹಾಗೂ ಹದ್ದುಬಸ್ತು ತಃಖ್ತೆ :

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ (ಎ/ಗುಂ) | ಚಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಕೋಲಾರ ರಸ್ತೆ ಹೊಸ ಬಿನ್ನಮಂಗಲ ಕೊಳಚೆ ಪ್ರದೇಶ (ಮರ್ಫಿ ಟೌನ್, ಬಿನ್ನಮಂಗಲ ಕೊಳಚೆ ಪ್ರದೇಶ, ಹಳೆ ಮದ್ರಾಸ್ ರಸ್ತೆ, ಬೆಂಗಳೂರು) | ಸಿಐ.ಟಿ.ಬಿ. ಕೆಂಪಯ್ಯ, ಮುನಿಯಮ್ಮ, ಧೂಲ್‌ರಾಜ್ ಸೇಠ್, ಸಿ.ಹೆಚ್. ಮದನ್‌ಲಾಲ್, ಕೆರೆ ಅಂಗಳ | 136 137 141 148 (ಪ್ರಸ್ತುತ ಸಿಟಿಎಸ್. ನಂ405ರ ಪೈಕಿ) | 0–11<br>0–04<br>0–02<br>0–13 | ಸಿ.ಟಿ.ಎಸ್. ನಂ. 823–932 | ಖಾಲಿ ಜಾಗ ಹಾಗೂ 100 ಅಡಿ ರಸ್ತೆ | ಸಿಟಿಎಸ್ ನಂ. 830–4050 ಉಳಿಕೆ | ರಸ್ತೆ |
| | | | **ಒಟ್ಟು** | **0–31** | | | | |

ಸದರಿ ಸಿ.ಟಿ.ಎಸ್. ನಂಬರ್‌ಗಳ ಮಾಲೀಕತ್ವದ ಬಗ್ಗೆ ಅಂತಿಮವಾಗಿ ತೀರ್ಮಾನ (ಇತ್ಯರ್ಥ)ವಾದ ನಂತರ ಆಗುವಂತಹ ನಿಯಮಗಳಿಗೊಳಪಟ್ಟು ಅಂತಿಮ ಅಧಿಸೂಚನೆಯನ್ನು ಹೊರಡಿಸಿದೆ.

**ಡಾ|| ಜಿ.ಸಿ. ಪ್ರಕಾಶ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

**PR-53**
**SC-50**

**ಕಂದಾಯ ಸಚಿವಾಲಯ, ಬೆಂಗಳೂರು.**

**ಭೂಸ್ವಾಧೀನ ಅಧಿನಿಯಮ 6(1) ನೇ ಪ್ರಕರಣದ ಮೇರೆಗೆ ಘೋಷಣೆ**

**ಅಧಿಸೂಚನೆ ಸಂಖ್ಯೆ: ಕಂಇ/150/ಭೂಸ್ವಾಬೆ 2012 ದಿನಾಂಕ: 6–3–2013**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಆಸ್ತಿಗಳು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ರಾಜರಾಜೇಶ್ವರಿನಗರ ವಾರ್ಡ್ ಸಂಖ್ಯೆ:160, (ಹಳೇವಾರ್ಡ್ ಸಂಖ್ಯೆ:24) ಹಲಗೆವಡೇರಹಳ್ಳಿ ಗ್ರಾಮದ ಮಜಿರೆ ಗಟ್ಟಿಗೆರೆ ಖಾನೇಷುಮಾರಿ ನಂ.112, ಸ್ವತ್ತಿನ ಸಂಖ್ಯೆ:169, (ಕ್ರಮಸಂಖ್ಯೆ:3959) ರ ಖಾತೆ ನಂ.168ರ ಪೈಕಿ 1476 ಚ.ಅಡಿ ಜಾಗವನ್ನ ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ರಸ್ತೆ ಅಗಲೀಕರಣಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳುತ್ತಿದ್ದು, ಸದರಿ ಸ್ವತ್ತಿನ ವಿವರ ಈ ಕೆಳಕಂಡಂತೆ ಇರುತ್ತದೆ. ಸದರಿ ಸ್ವತ್ತನ್ನು ಭೂಸ್ವಾಧೀನಪಡಿಸಿಕೊಳ್ಳಲು 1894 ರ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಮೇರೆಗೆ ಕ್ರಮಾಂಕ:ಎಲ್‌ಎಕ್ಯೂ/ಸಿಆರ್/37/2008–09, ದಿನಾಂಕ:22–12–2011 ರಂದು ಹೊರಡಿಸಲಾದ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ದಿನಾಂಕ:05–01–2012 ರಂದು ಪ್ರಕಟಿಸಲಾಗಿದೆ. ಮತ್ತು ತಿದ್ದುಪಡಿ ಅಧಿಸೂಚನೆಯನ್ನು ದಿನಾಂಕ:15–01–2013ರಂದು ಪ್ರಕಟಿಸಲಾಗಿದೆ.

ಮತ್ತು ಕರ್ನಾಟಕ ಕಾಯ್ದೆ 33–1991 ರನ್ವಯ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ (ಕೇಂದ್ರ ಅಧಿನಿಯಮ ಸಂಖ್ಯೆ:1894) ರ 5–ಎ ಪ್ರಕರಣದ, (2) ನೇ ಉಪ ಪ್ರಕರಣದ ಮತ್ತು 6(1ಎ) ಪ್ರಕರಣದ ಮೇರೆಗೆ ಉಪ ಆಯುಕ್ತರು (ಭೂಸ್ವಾಧೀನ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯವರು ನೀಡಿರುವ ವರದಿಯನ್ನು ಪರಿಶೀಲಿಸಿದ ನಂತರ, ಮೇಲೆ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ ಸದರಿ ಭೂಮಿಗಳನ್ನು ಅರ್ಜನೆ ಮಾಡಿಕೊಳ್ಳುವ ಅಗತ್ಯವಿದೆ ಎಂದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ,

ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಭೂಮಿಗಳು ಅಗತ್ಯವಾಗಿವೆ ಎಂದು ಸದರಿ ಅಧಿನಿಯಮದ 6(1)ನೇ ಪ್ರಕರಣದ ಮೇರೆಗೆ ಈ ಮೂಲಕ ಘೋಷಿಸಲಾಗಿದೆ.

ವಿಶೇಷ ಭೂಸ್ವಾಧೀನಾಧಿಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರನ್ನು ಸದರಿ ಭೂಮಿಗಳಿಗೆ ಸಂಬಂಧಿಸಿದಂತೆ ಇನ್ನು ಮುಂದೆ ಕೈಗೊಳ್ಳುವ ಎಲ್ಲಾ ವ್ಯವಹಾರಗಳ ಕುರಿತಂತೆ ಜಂಟಿ ಆಯುಕ್ತರು (ಭೂಸ್ವಾಧೀನ) ರವರ ಪ್ರಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಸದರಿ ಭೂ ಅರ್ಜನೆ ಅಧಿನಿಯಮದ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ನೇಮಕ ಮಾಡಲಾಗಿದೆ. ಹಾಗೂ ಸದರಿ ಭೂಮಿಯ ಅರ್ಜನೆಗೆ ಸಂಬಂಧಿಸಿದ ಆದೇಶವನ್ನು ಪಡೆದುಕೊಳ್ಳುವ ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶನ ನೀಡಲಾಗಿದೆ. ಸದರಿ ಭೂಮಿಗಳ ನಕಾಶೆಯನ್ನು ಪರಿವೀಕ್ಷಣೆಗಾಗಿ ವಿಶೇಷ ಭೂಸ್ವಾಧೀನಾಧಿಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರ ಕಛೇರಿಯಲ್ಲಿ ಇಡಲಾಗಿದೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



## ಅನುಸೂಚಿ

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ರಾಜರಾಜೇಶ್ವರಿನಗರ ವಾರ್ಡ್ ಸಂಖ್ಯೆ:160, (ಹಳೇವಾರ್ಡ್ ಸಂಖ್ಯೆ:24) ಹಲಗೆವಡೇರಹಳ್ಳಿ ಗ್ರಾಮದ ಮಜಿರೆ ಗಟ್ಟಿಗೆರೆ ಖಾನೇಷುಮಾರಿ ನಂ.112, ಸ್ವತ್ತಿನ ಸಂಖ್ಯೆ:169, (ಕ್ರಮಸಂಖ್ಯೆ:3959) ರ ಖಾತೆ ನಂ.168ರ ಪೈಕಿ 1476 ಚ.ಅಡಿ ಜಾಗವನ್ನ ಸಾರ್ವಜನಿಕ ಉದ್ದೇಶಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳುತ್ತಿದ್ದು, ಸದರಿ ಸ್ವತ್ತಿನ ವಿವರ ಈ ಕೆಳಕಂಡಂತೆ ಇರುತ್ತದೆ.

| ಕ್ರ.ಸಂ. | ಹಕ್ಕುದಾರರ/ಖಾತೆದಾರರ ಹೆಸರು | ಅನುಭವದಾರರ ಹೆಸರು | ಖಾನೇಷುಮಾರಿ ನಂ/ ಖಾತೆ ನಂ | ಭೂಸ್ವಾಧೀನ ಪಡಿಸಿಕೊಳ್ಳಲು ಇಚ್ಚಿಸಿರುವ ವಿಸ್ತೀರ್ಣ (ಚ.ಅ.ಗಳಲ್ಲಿ) | ತರಹೆ | ಚಕ್ಕುಬಂದಿ | | | |
|---|---|---|---|---|---|---|---|---|---|
| | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಲೇ॥ರಾಮಸ್ವಾಮಿ ರವರ ಮಕ್ಕಳು<br>1) ಮಹದೇವ<br>2) ಪ್ರಮೀಳಮ್ಮ<br>3) ಸುವರ್ಣಮ್ಮ<br>4) ಸರಸ್ವತಮ್ಮ<br>5) ಸುಜಾತಮ್ಮ<br>6) ಗೀತಮ್ಮ<br>7) ಲೇ॥ಗಾಯತ್ರಮ್ಮ<br>8) ಪವಿತ್ರಮ್ಮ<br>9) ಮಂಜುಳಮ್ಮ<br>10) ಲೇ॥ರಾಘವೇಂದ್ರ | ಮಹದೇವ ಬಿನ್ ಲೇ॥ರಾಮಸ್ವಾಮಿ | ಖಾನೇಷುಮಾರಿ ನಂ.112 ಹೊಸ ನಂ. 168/169 ಕ್ರಮಸಂಖ್ಯೆ: 3959 ಖಾತಾ ನಂ. 168 | 1476 ಚ.ಅಡಿ | ಖಾಲಿ ನಿವೇಶನ | ಖಾಸಗಿ ಸ್ವತ್ತು | 2ನೇ ಮುಖ್ಯರಸ್ತೆ | ಖಾಸಗಿ ಸ್ವತ್ತು | ಡಾ॥ಶ್ರೀನಿವಾಸಯ್ಯ ರಸ್ತೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಲಲಿತಾ ಹೆಚ್. ಹಂದಿಗೋಳ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸ್ವಾಧೀನ–2)

PR- 9
SC-25

**ವಿಶೇಷ ಸೂಚನೆ :–** ಮೇಲ್ಕಂಡ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರ ದಿನಾಂಕ:16–01–2014 ಸಂಚಿಕೆ–3 ಭಾಗ–6 ಪುಟ ಸಂಖ್ಯೆ: 56 ರಲ್ಲಿ ಪ್ರಕಟಣೆಗೊಂಡಿದ್ದು, ತಾಂತ್ರಿಕ ದೋಷದಿಂದ ತಪ್ಪಾಗಿ ಪ್ರಕಟಿಸಲಾದ ಸದರಿ ಅಧಿಸೂಚನೆಯನ್ನು ಸರಿಪಡಿಸಬೇಕೆಂದು ಸರ್ಕಾರದ ಪತ್ರ ಸಂಖ್ಯೆ: ಕಂಇ 34 ಭೂಸ್ವಾಬೆ 2012 ದಿನಾಂಕ: 5–3–2014ರಲ್ಲಿ ತಿಳಿಸಿರುವ ಮೇರೆಗೆ ಈ ದಿನಾಂಕ: 27–03–2014ರಂದು ಸಂಚಿಕೆ–13ರಲ್ಲಿ ಸರಿಪಡಿಸಿ ಮರು ಪ್ರಕಟಿಸಲಾಗಿದೆ.

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59